ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 393+394 |
| ಸದಸ್ಯರ ಹೆಸರು | : | ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) ಮತ್ತು ಶ್ರೀ ಕಾಂತರಾಜ್ (ಬಿ.ಎಂ.ಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 15-12-2021. |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರಿನಿಂದ ತುಮಕೂರು ಸಂಪರ್ಕಿಸುವ ರಾಷ್ಟ್ರೀಯ ಹೆದ್ದಾರಿ ಯಾವುದು; ಅದು ಎಷ್ಟು ಕಿ.ಮೀ. ಇದೆ; ಏಕಪಥ ರಸ್ತೆಯಿಂದ ಯಾವಾಗ ಚತುಷ್ಪಥ ರಸ್ತೆಯನ್ನಾಗಿ ನಿರ್ಮಿಸಲಾಯಿತು; | ಬೆಂಗಳೂರಿನಿಂದ ತುಮಕೂರು ಸಂಪರ್ಕಿಸುವ ರಾಷ್ಟ್ರೀಯ ಹೆದ್ದಾರಿ -4 (ಹೊಸ ಹೆದ್ದಾರಿ-48) ಆಗಿದ್ದು, ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರಕ್ಕೆ (NHAI) ಸಂಬಂಧಿಸಿರುತ್ತದೆ. ಸದರಿಯವರು ಈ ಕೆಳಕಂಡಂತೆ ವರದಿಯನ್ನು ನೀಡಿರುತ್ತಾರೆ.<br><br>ಬೆಂಗಳೂರಿನಿಂದ ತುಮಕೂರು ಸಂಪರ್ಕಿಸುವ ರಾಷ್ಟ್ರೀಯ ಹೆದ್ದಾರಿ-4 (ಹೊಸ ಹೆದ್ದಾರಿ-48) ಆಗಿದ್ದು, ಇದರ ಉದ್ದ 62.00 ಕಿ.ಮೀ. ಗಳಾಗಿರುತ್ತದೆ.<br><br>1. ಬೆಂಗಳೂರು-ನೆಲಮಂಗಲ ವ್ಯಾಪ್ತಿಯ ರಸ್ತೆಯು ಕಿ.ಮೀ.10.00 ರಿಂದ 29.50 ವರೆಗೆ ಒಟ್ಟು ಉದ್ದ 19.50 ಕಿಮೀ.<br>• ಕಿ.ಮೀ.10.00 ರಿಂದ 23.50 ಕಿ.ಮೀ ವರೆಗೆ ಒಟ್ಟು 13.50 ಕಿ.ಮೀ. ರಸ್ತೆಯನ್ನು (ಬೆಂಗಳೂರು -ನೆಲಮಂಗಲ ಭಾಗ) ದ್ವಿಪಥ ರಸ್ತೆಯಿಂದ 4 ಪಥದ ರಸ್ತೆಯನ್ನಾಗಿ 1983 ರಿಂದ 1988 ರವರೆಗಿನ ಅವಧಿಯಲ್ಲಿ<br>• ಕಿ.ಮೀ.23.50 ರಿಂದ 29.50 ರವರೆಗೆ ಒಟ್ಟು 6.00 ಕಿ.ಮೀ. ರಸ್ತೆಯನ್ನು 4 ಪಥದ ರಸ್ತೆಯನ್ನಾಗಿ 1983 ರಲ್ಲಿ ರಾಜ್ಯ ಲೋಕೋಪಯೋಗಿ ಇಲಾಖೆಯ ರಾಷ್ಟ್ರೀಯ ಹೆದ್ದಾರಿಯಿಂದ (NH) ಅಭಿವೃದ್ಧಿಪಡಿಸಲಾಗಿದೆ.<br>• ಎಲಿವೇಟೆಡ್ ರಸ್ತೆಯನ್ನು 2007ರಲ್ಲಿ ಪ್ರಾರಂಭಿಸಿ 2010ರಲ್ಲಿ ಪೂರ್ಣಗೊಳಿಸಲಾಗಿದೆ.<br>2. ನೆಲಮಂಗಲ-ತುಮಕೂರು ವ್ಯಾಪ್ತಿಯ (ರಾಷ್ಟ್ರೀಯ ಹೆದ್ದಾರಿ-4) ಕಿ.ಮೀ.29.50 ರಿಂದ 62.00 ರವರೆಗೆ ಒಟ್ಟು 32.50 ಕಿ.ಮೀ. ರಸ್ತೆಯನ್ನು ನಾಲ್ಕು ಪಥದಿಂದ 6 ಪಥದ ರಸ್ತೆಯವರೆಗೆ ಅಗಲೀಕರಣ ಕಾಮಗಾರಿಯನ್ನು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದ ವತಿಯಿಂದ ದಿನಾಂಕ:05.11.2007 ರಂದು ಪ್ರಾರಂಭಿಸಿ ದಿನಾಂಕ:10.12.2010 ರಂದು ಪೂರ್ಣಗೊಳಿಸಲಾಗಿದೆ. |
| ಆ) | ಈ ಹೆದ್ದಾರಿಯನ್ನು ನಿರ್ಮಾಣ ಮಾಡಿ ನಿರ್ವಹಣೆ ಮಾಡುತ್ತಿರುವ ಸಂಸ್ಥೆ ಯಾವುದು; ಇದು ಮಾಡಿಕೊಂಡಿರುವ ಒಡಂಬಡಿಕೆ ಅನ್ವಯ ಇವರ ಅವಧಿ ಯಾವಾಗ ಮುಗಿದಿದೆ; (ವಿವರವಾದ ಮಾಹಿತಿ ನೀಡುವುದು) | 1. ಬೆಂಗಳೂರು-ನೆಲಮಂಗಲ ರಸ್ತೆಯ ಕಿ.ಮೀ.10.00 ರಿಂದ 29.50 ವರೆಗಿನ ಅಂದರೆ ಒಟ್ಟು ಉದ್ದ 19.50 ಕಿಮೀ. ರಸ್ತೆಯನ್ನು ಮೆ: ನವಯುಗ, ಬೆಂಗಳೂರು ಟೋಲ್ವೇಸ್ ಪ್ರೈ. ಲಿಮಿಟೆಡ್ ಇವರಿಗೆ BOT Mode ಅಡಿಯಲ್ಲಿ ದಿನಾಂಕ: 09.05.2007 ರಂದು 20 ವರ್ಷಗಳ ರಿಯಾಯಿತಿ ಅವಧಿಯೊಂದಿಗೆ ಅಂದರೆ ದಿನಾಂಕ:09.12.2027 ರವರೆಗೆ (ನಿರ್ಮಾಣ ಅವಧಿಯನ್ನು ಒಳಗೊಂಡಂತೆ) ಒಪ್ಪಂದವನ್ನು ಮಾಡಿಕೊಳ್ಳಲಾಗಿರುತ್ತದೆ. ಆದರೆ ರಿಯಾಯಿತಿ ಒಪ್ಪಂದವನ್ನು ದಿನಾಂಕ;10.03.2021 ರಿಂದ ರಿಯಾಯಿತಿದಾರರ ಡಿಫಾಲ್ಟ್‌ನಿಂದಾಗಿ ವಜಾಗೊಳಿಸಲಾಗಿದೆ.<br><br>ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರವು (NHAI) ಸ್ಪರ್ಧಾತ್ಮಕ ಬಿಡ್ಡಿಂಗ್ ಮೂಲಕ **ಟೋಲ್ ಸಂಗ್ರಹವನ್ನು** ಏಜೆನ್ಸಿ ಮೆ:: ಸಾಯಿ ಎಂಟರ್ ಪ್ರೈಸಸ್ ರವರಿಗೆ |

| | | |
|---|---|---|
| | | 01 ವರ್ಷದ ಅವಧಿಗೆ ಅಂದರೆ ದಿನಾಂಕ:30.04.2021 ರಿಂದ 29.04.2022 ರವರೆಗೆ ನೀಡಲಾಗಿರುತ್ತದೆ.<br>2. NH-4ರ ನೆಲಮಂಗಲ-ತುಮಕೂರು ವಿಭಾಗದ ಕಿ.ಮೀ.29.50 ರಿಂದ ಕಿ.ಮೀ. 62.00 ವರೆವಿಗೆ ಅಂದರೆ ಒಟ್ಟು 32.50 ಕಿ.ಮೀ.ಗಳ ವರೆಗೆ B.O.T. ಅಡಿಯಲ್ಲಿ ದಿನಾಂಕ: 28.06.2001ರ ಒಪ್ಪಂದದ ಪ್ರಕಾರ ಟೋಲ್ ಬಳಕೆದಾರರ ಶುಲ್ಕವನ್ನು ರಿಯಾಯಿತಿದಾರ M/s JAS Toll Pvt. Ltd. ಮೂಲಕ ಸಂಗ್ರಹ ಮಾಡಲಾಗುತ್ತಿದೆ. ಮತ್ತು ಗುತ್ತಿಗೆದಾರರ ಅವಧಿಯ ಅಂತಿಮ ದಿನಾಂಕ:22.06.2021 ರವರೆಗೆ ಇರುತ್ತದೆ. |
| ಇ) | ಸದರಿ ರಸ್ತೆಯ ನಿರ್ವಹಣೆ ಸಂಸ್ಥೆಯ ಒಡಂಬಡಿಕೆ ಅವಧಿಯು ಮುಗಿದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ರಸ್ತೆಯನ್ನು ಟೋಲ್ ಮುಕ್ತ ರಸ್ತೆಯನ್ನಾಗಿ ಮಾಡದೇ ಸಂಸ್ಥೆಯೇ ಟೋಲ್ ಶುಲ್ಕವನ್ನು ಸಂಗ್ರಹಿಸುತ್ತಿರುವುದು ನ್ಯಾಯಸಮ್ಮತವೇ; | 1. ಬೆಂಗಳೂರು-ನೆಲಮಂಗಲ ವ್ಯಾಪ್ತಿಯ ಕಿ.ಮೀ.10.00 ರಿಂದ 29.50 ವರೆಗಿನ ರಸ್ತೆಗೆ ಸಂಬಂಧಿಸಿದಂತೆ 2027 ರವರೆಗೆ ರಿಯಾಯಿತಿ ಒಪ್ಪಂದದ ಅವಧಿ ಇರುತ್ತದೆ.<br>2. NH-4ರ ನೆಲಮಂಗಲ-ತುಮಕೂರು ವಿಭಾಗದ ಕಿ.ಮೀ.29.50 ರಿಂದ ಕಿ.ಮೀ. 62.00 ವರೆವಿಗೆ ಅಂದರೆ ಒಟ್ಟು 32.50 ಕಿ.ಮೀ.ಗಳ ವರೆಗೆ B.O.T. ಅಡಿಯಲ್ಲಿ ದಿನಾಂಕ: 28.06.2001ರ ಒಪ್ಪಂದದ ಪ್ರಕಾರ M/s JAS Toll Pvt. Ltd. ನ ದಿನಾಂಕ: 22.06.2021 ರವರೆಗೆ ಇರುತ್ತದೆ.<br>ಪ್ರಸ್ತುತ ಸದರಿ ಒಪ್ಪಂದದ ಅವಧಿಯು ಮುಕ್ತಾಯವಾಗಿದ್ದು, ರಿಯಾಯಿತಿದಾರರು ಆರ್ಬಿಟ್ರೇಷನ್‌ಗೆ ಹೋಗಿದ್ದು, ಆರ್ಬಿಟ್ರೇಷನ್ ನ್ಯಾಯಾಲಯವು 474 ದಿನಗಳವರೆಗೆ ಟೋಲ್ ವಸೂಲಿ ಮಾಡಲು ಅವಾರ್ಡ್ ಮಾಡಿರುತ್ತದೆ. ಈ ಕ್ರಮವನ್ನು ಪ್ರಶ್ನಿಸಿ ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರವು ದೆಹಲಿಯ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿಸಿರುತ್ತದೆ. ಪ್ರಕರಣವು ನ್ಯಾಯಾಲಯದಲ್ಲಿ ಬಾಕಿ ಇರುತ್ತದೆ. ಮಾನ್ಯ ಉಚ್ಚ ನ್ಯಾಯಾಲಯದಿಂದ ಈ ಬಗ್ಗೆ ಯಾವುದೇ ಮಧ್ಯಂತರ ಆದೇಶ ನೀಡದ ಕಾರಣ ರಿಯಾಯಿತಿದಾರರಾದ M/s JAS Toll Pvt. Ltd. ರವರು ಆರ್ಬಿಟ್ರೇಷನ್ ನ್ಯಾಯಾಲಯದ ಆದೇಶದಂತೆ ಟೋಲ್ ಸಂಗ್ರಹಣೆಯನ್ನು ಮುಂದುವರೆಸಿರುತ್ತಾರೆ. |
| ಈ) | ಹಾಗಿದ್ದಲ್ಲಿ, ಸರ್ಕಾರವು ಇದರ ಸಂಬಂಧ ಇಲ್ಲಿಯವರೆಗೆ ನಡೆಸಿರುವ ಪತ್ರ ವ್ಯವಹಾರಗಳ ಯಥಾಪ್ರತಿಗಳನ್ನು ನೀಡುವುದು. | ಇದರ ಸಂಬಂಧ ಎನ್‌ಹೆಚ್‌ಎಐ ಸಂಸ್ಥೆಯು ಇಲ್ಲಿಯವರೆಗೂ ನಡೆಸಿದ ಪತ್ರ ವ್ಯವಹಾರಗಳ ಪ್ರತಿಯನ್ನು ಅನುಬಂಧ-1 ರಲ್ಲಿ ಲಗತ್ತಿಸಿದೆ. |
| ಉ) | ಒಡಂಬಡಿಕೆ ಅವಧಿ ಮುಗಿದಿದ್ದರೂ ನ್ಯಾಯಾಲಯದ ತಡೆಯಾಜ್ಞೆ ಆದೇಶವಿಲ್ಲದಿದ್ದರೂ, ಸಂಸ್ಥೆಗೆ ಶುಲ್ಕ ಸಂಗ್ರಹಣೆಗೆ ಅವಕಾಶ ಮಾಡಿಕೊಟ್ಟಿರುವುದಕ್ಕೆ ಕಾರಣಗಳೇನು; | ಸದರಿ ವಿಷಯವು ನ್ಯಾಯಾಲಯದಲ್ಲಿ ಬಾಕಿ ಇರುವುದರಿಂದ ಪ್ರಸ್ತುತ ಅಸ್ಥಿತ್ವದಲ್ಲಿರುವ ರಿಯಾಯಿತಿದಾರ M/s JAS Toll Pvt. Ltd. ಇವರು ಟೋಲ್ ಸಂಗ್ರಹಣೆ ಮಾಡುತ್ತಿದ್ದಾರೆ. |
| ಊ) | ಒಂದು ದಿನಕ್ಕೆ ಸರಾಸರಿ ನೆಲಮಂಗಲ ಟೋಲ್ ಮತ್ತು ಕ್ಯಾತ್ಸಂದ್ರ ಟೋಲ್‌ನಲ್ಲಿ ಎಷ್ಟು ಶುಲ್ಕ ಸಂಗ್ರಹವಾಗುತ್ತದೆ; ಈ ಹಣವನ್ನು ಯಾವ ಖಾತೆಯಲ್ಲಿ ಇಡಲಾಗಿದೆ; ಇದಕ್ಕೆ ಜವಾಬ್ದಾರರಾರು? | • ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ (NHAI) ರವರು ನೀಡಿರುವ ವರದಿಯಂತೆ ನೆಲಮಂಗಲ ಟೋಲ್ ಪ್ಲಾಜಾಕ್ಕೆ ಸಂಬಂಧಿಸಿದಂತೆ ವಿವರಗಳು ಕೆಳಕಂಡಂತಿವೆ.<br>I. ಬೆಂಗಳೂರು – ನೆಲಮಂಗಲ ನಡುವೆ 6 ಟೋಲ್ ಪ್ಲಾಜಾಗಳು ಇದ್ದು (2 ಮುಖ್ಯ TP + 4 ಮಧ್ಯಂತರ TP) ವಿವರಗಳು ಈ ಕೆಳಗಿನಂತೆ ನೀಡಲಾಗಿದೆ.<br>• ಕಿ.ಮೀ. 14.875 ಮುಖ್ಯ ಟೋಲ್ ಪ್ಲಾಜಾ @ ಪಾರ್ಲೆ-ಜಿ ಕಾರ್ಖಾನೆ. |

| | | |
|---|---|---|
| | ( ವಿವರವಾದ ಮಾಹಿತಿಯನ್ನು ನೀಡುವುದು) | • ಕಿ.ಮೀ. 26.075 ಮುಖ್ಯ ಟೋಲ್ ಪ್ಲಾಜಾ @ ನೆಲಮಂಗಲ<br>• ಈ ವ್ಯಾಪ್ತಿಯ ಸರಾಸರಿ ಟೋಲ್ ಸಂಗ್ರಹ ದಿನಕ್ಕೆ ರೂ 23.00 ಲಕ್ಷಗಳು.<br>• ಟೋಲ್ ಮೊತ್ತವನ್ನು ನವದೆಹಲಿಯಲ್ಲಿರುವ ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ (NHAI)ನ ಕೇಂದ್ರ ಸ್ಥಾನದ ಖಾತೆಗೆ Remit ಮಾಡಲಾಗುತ್ತದೆ ಮತ್ತು ಅದರ ನಂತರ, ಟೋಲ್ ಮೊತ್ತವನ್ನು CFI ಅಂದರೆ ಕನ್ಸಾಲಿಡೇಟೆಡ್ ಫಂಡ್ ಆಫ್ ಇಂಡಿಯಾಗೆ ವರ್ಗಾಯಿಸಲಾಗುತ್ತದೆ.<br>II ಕುಲುಮೆಪಾಳ್ಯದ ಟೋಲ್ ಪ್ಲಾಜಾ ಮತ್ತು ಕ್ಯಾತಸಂದ್ರ ಮತ್ತು ಟೋಲ್ ಪ್ಲಾಜಾಗೆ ಸಂಬಂಧಿಸಿದಂತೆ ವಿವರಗಳು ಕೆಳಕಂಡಂತಿವೆ.(ನೆಲಮಂಗಲ-ತುಮಕೂರು ಭಾಗ)<br>ಸದರಿ ಎರಡು ಟೋಲ್ ಪ್ಲಾಜಾಗಳಲ್ಲಿ ದೈನಂದಿನ ಸರಾಸರಿ ಸಂಗ್ರಹವು ದಿನಕ್ಕೆ ರೂ. 25.76 ಲಕ್ಷಗಳು. ಟೋಲ್ ಸಂಗ್ರಹಣೆಯನ್ನು M/s JAS Toll Pvt. Ltd ರಿಯಾಯಿತಿದಾರರು ನಿರ್ವಹಿಸುತ್ತಿದ್ದಾರೆ. |

ಕಡತ ಸಂಖ್ಯೆ: ಲೋಇ 331 ಸಿಎನ್‌ಹೆಚ್ 2021 (ಇ)

(ಸಿ.ಸಿ. ಪಾಟೀಲ)
ಲೋಕೋಪಯೋಗಿ ಸಚಿವರು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 393+394ರ ವಿವರ (ಬೆಂಗಳೂರು-ತುಮಕೂರ ರಾಷ್ಟ್ರೀಯ ಹೆದ್ದಾರಿ)

| | ಹೆದ್ದಾರಿ ಭಾಗ | ಉದ್ದ ಕಿಮಿ | ರಿಯಾತಿದಾರರು | ರಿಯಾಯಿತಿ ಅವಧಿ | ಸರಾಸರಿ ಟೋಲ್ ಸಂಗ್ರಹಣೆ ಮೊತ್ತ/ಪ್ರತಿ ದಿನ | ಒಟ್ಟು ಟೋಲ್ ಬೂತ್‌ಗಳ ಸಂಖ್ಯೆ | ಪ್ರಸ್ತುತ ಸ್ಥಿತಿ |
|---|---|---|---|---|---|---|---|
| 1. | ಬೆಂಗಳೂರು-ನೆಲಮಂಗಲ | 10.00-29.50 19.50 ಕಿಮೀ | ಮೆ.ನವಯುಗ ಟೋಲ್‌ವೇಸ್ | 2027 | ರೂ.23.00 ಲಕ್ಷ | 2 ಮುಖ್ಯ+4 ಮಧ್ಯಂತರ | ಮೂಲ ರಿಯಾಯಿತಿದಾರರು defaultನಿಂದ ಪ್ರಸ್ತುತ ಟೋಲ್ ಸಂಗ್ರಹಣೆಯನ್ನು ಮೆ. ಸಾಯಿ ಎಂಟರ್‌ಪ್ರೈಸ್ ಇವರಿಗೆ ಏಪ್ರಿಲ್-22ರವರೆಗೆ ಟೋಲ್ ಸಂಗ್ರಹಿಸಲು ನೀಡಲಾಗಿದೆ. |
| 2. | ನೆಲಮಂಗಲ-ತುಮಕೂರು | 29.50-62.00 32.50ಕಿಮೀ | ಮೆ. ಜಸ್ ಟೋಲ್ | 2021 | ರೂ.26.50 ಲಕ್ಷ | 2 ಮುಖ್ಯ ಟೋಲ್ | ಮೂಲ ರಿಯಾಯಿತಿದಾರರ ಅವಧಿ ಪೂರ್ಣಗೊಂಡಿದ್ದು, ರಿಯಾತಿದಾರರು ಆರ್ಬಿಟ್ರೇಷನ್ ಹೂಡಿದ್ದು, ಆರ್ಬಿಟ್ರೇಷನ್ ನ್ಯಾಯಾಲಯವು 474 ದಿವಸಗಳ ಟೋಲ್ ಸಂಗ್ರಹಿಸಲು ಅವಾರ್ಡ್ ಮಾಡಿರುತ್ತದೆ. ಎನ್‌ಹೆಚ್‌ಎಐ ಸಂಸ್ಥೆಯು ಈ ಬಗ್ಗೆ ದೆಹಲಿ ಉಚ್ಚ ನ್ಯಾಯಾಲಯದಲ್ಲಿ ದಾವೆ ಹೂಡಿದ್ದು, ಪ್ರಕರಣ ಬಾಕಿ ಇರುವುದರಿಂದ ಮೂಲ ರಿಯಾಯಿತದಾರರು ಟೋಲ್ ಸಂಗ್ರಹಣೆ ಮುಂದುವರೆಸಿರುತ್ತಾರೆ. |